## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1575 (1876) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪ್ರದೀಪ್ ಶೆಟ್ಟರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 15-03-2022 |
| ಉತ್ತರಿಸುವ ಸಚಿವರು | : | ಪೌರಾಡಳಿತ, ಸಣ್ಣ ಕೈಗಾರಿಕೆ, ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರ ಸರ್ಕಾರದಿಂದ 2015 ರಿಂದ 2021ರವರೆಗೆ ಸ್ವಚ್ಛ ಭಾರತ ಯೋಜನೆಯಡಿಯಲ್ಲಿ ರಾಜ್ಯಕ್ಕೆ ಬಿಡುಗಡೆಯಾಗಿರುವ ಅನುದಾನವನ್ನು ಯಾವ ಯಾವ ಕಾರ್ಯಕ್ರಮಗಳಿಗೆ ನಿರ್ದಿಷ್ಟವಾಗಿ ಬಳಸಲಾಗುತ್ತಿದೆ; | • ಕೇಂದ್ರ ಪುರಸ್ಕೃತ ಸ್ವಚ್ಛ ಭಾರತ ಯೋಜನೆ (ನಗರ) ದಡಿ 2015 ರಿಂದ 2021 ರವರೆಗೆ ಕೇಂದ್ರದಿಂದ ರಾಜ್ಯಕ್ಕೆ ರೂ. 758.62 ಕೋಟಿಗಳ ಅನುದಾನ ಬಿಡುಗಡೆಯಾಗಿರುತ್ತದೆ.<br>• ಸದರಿ ಅನುದಾನದಲ್ಲಿ ವೈಯಕ್ತಿಕ ಶೌಚಾಲಯಗಳ ನಿರ್ಮಾಣ, ಸಮುದಾಯ /ಸಾರ್ವಜನಿಕ ಶೌಚಾಲಯಗಳ ನಿರ್ಮಾಣ, ಐ.ಇ.ಸಿ ಮತ್ತು ಘನತ್ಯಾಜ್ಯ ವಸ್ತು ನಿರ್ವಹಣೆಯ ಘಟಕಗಳಿಗೆ ಬಳಸಲಾಗುತ್ತಿದೆ. |
| ಆ) | 2015 ರಿಂದ 2021 ರವರೆಗೆ ಬಿಡುಗಡೆಯಾದಂತಹ ಅನುದಾನದಲ್ಲಿ ಐ.ಇ.ಸಿ. ಕಾರ್ಯಕ್ರಮಗಳಿಗೆ ಮೀಸಲಿರಿಸಿರುವ ಅನುದಾನವೆಷ್ಟು; | • 2015 ರಿಂದ 2021 ರವರೆಗೆ ಸ್ವಚ್ಛ ಭಾರತ ಯೋಜನೆಯಡಿ ಬಿಡುಗಡೆಯಾಗಿರುವ ಅನುದಾನದಲ್ಲಿ ಐ.ಇ.ಸಿ ಕಾರ್ಯಕ್ರಮಗಳಿಗೆ ಒಟ್ಟು ರೂ. 29.66 ಕೋಟಿಗಳ ಅನುದಾನವನ್ನು ಮೀಸಲಿರಿಸಲಾಗಿರುತ್ತದೆ. |
| ಇ) | 2015 ರಿಂದ 2021 ಐ.ಇ.ಸಿ ಕಾರ್ಯಕ್ರಮಗಳ ಅಡಿಯಲ್ಲಿ ಯಾವ ಯಾವ ರೀತಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ; | ಸ್ವಚ್ಛ ಭಾರತ ಮಿಷನ್ ಯೋಜನೆಯಡಿ ಐ.ಇ.ಸಿ ಕಾರ್ಯಕ್ರಮಗಳನ್ನು ಸ್ಥಳೀಯ ಹಾಗೂ ರಾಜ್ಯ ಮಟ್ಟದಲ್ಲಿ ಕೈಗೊಳ್ಳಲಾಗುತ್ತಿದೆ.<br><br>**<u>ನಗರ ಸ್ಥಳೀಯ ಸಂಸ್ಥೆ</u> :**<br>ಸ್ವಚ್ಛ ಭಾರತ್ ಮಿಷನ್ (ನಗರ) ಮುಖ್ಯ ಧ್ಯೇಯೋದ್ದೇಶದಂತೆ ನಗರಗಳನ್ನು ಸ್ವಚ್ಛ ಹಾಗೂ ಬಯಲು ಶೌಚ ಮುಕ್ತ ಪ್ರದೇಶಗಳನ್ನಾಗಿಸಲು, ಅವುಗಳನ್ನು Garbage Free Cities ಗಳನ್ನಾಗಿ ಮಾಡಲು ಹಾಗೂ ಸ್ವಚ್ಛ ಸರ್ವೇಕ್ಷಣ ಸಮೀಕ್ಷೆಯಲ್ಲಿ ಗರಿಷ್ಠ ಅಂಕಗಳನ್ನು ಪಡೆಯುವ ನಿಟ್ಟಿನಲ್ಲಿ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ,<br><br>– ಸಾರ್ವಜನಿಕರು ಮೂಲದಲ್ಲಿಯೇ ಕಸ ವಿಂಗಡಣೆ ಮಾಡುವುದರಿಂದ ಉಂಟಾಗುವ ಪ್ರಯೋಜನಗಳ ಕುರಿತು,<br>– ಕಸವನ್ನು ಎಲ್ಲೆಂದರಲ್ಲಿ ಎಸೆಯದೆ, ಹೋಂ ಕಂಪೋಸ್ಟಿಂಗ್ /ಸಮುದಾಯ ಕಂಪೋಸ್ಟಿಂಗ್ ಮಾಡುವಲ್ಲಿ ಹಾಗೂ ನಿಯಮಿತ ಘನತ್ಯಾಜ್ಯ ನಿರ್ವಹಣಾ ಸೇವಾ ಶುಲ್ಕ ಪಾವತಿ ಮುಂತಾದವುಗಳಲ್ಲಿ ಸಾರ್ವಜನಿಕರ ಪಾಲ್ಗೊಳ್ಳುವಿಕೆ ಕುರಿತು,<br>– ನಗರ ನೈರ್ಮಲ್ಯ ಕಾಪಾಡುವಲ್ಲಿ ವಿದ್ಯಾರ್ಥಿಗಳು, |

| | | |
|---|---|---|
| | | ಮಹಿಳೆಯರು, ವಿಷಯ ತಜ್ಞರು, ಇತರೆ ಭಾಗಿದಾರರ ಪಾಲ್ಗೊಳ್ಳುವಿಕೆಯನ್ನು ಖಾತರಿ ಪಡಿಸಿಕೊಳ್ಳುವ ನಿಟ್ಟಿನಲ್ಲಿ ಅರಿವು ಮೂಡಿಸಲು ಬೀದಿ ನಾಟಕ, ಪೋಸ್ಟರ್, ಬ್ಯಾನರ್, ಬಿತ್ತಿ ಪತ್ರ, ಶಾಲಾ ಕಾಲೇಜುಗಳಲ್ಲಿ ಭಾಷಣ ಸ್ಪರ್ಧೆ, ಡ್ರಾಯಿಂಗ್ ಸ್ಪರ್ಧೆ, ಕ್ವಿಜ್ ಸ್ಪರ್ಧೆ, ಸ್ವ-ಸಹಾಯ ಗುಂಪುಗಳಿಗೆ ತಿಳುವಳಿಕೆ ಕಾರ್ಯಕ್ರಮ, ಜಾತಾಗಳು, ಮ್ಯಾರಾಥನ್, ಪ್ರಮುಖ ಬೀದಿಗಳಲ್ಲಿ ಗೋಡೆ ಬರಹ, ಸ್ಥಳೀಯ ಸುದ್ದಿ ವಾಹಿನಿಗಳಲ್ಲಿ ಪ್ರಸಾರ ಕಾರ್ಯಕ್ರಮ, ಧ್ವನಿ ವರ್ಧಕಗಳ ಮೂಲಕ ಪ್ರಚಾರ ಮುಂತಾದ ಸ್ಥಳೀಯ ಮಟ್ಟದಲ್ಲಿ ಸೂಕ್ತವೆನಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br><br>**ಪೌರಾಡಳಿತ ನಿರ್ದೇಶನಾಲಯ:**<br><br>ಪೌರಾಡಳಿತ ನಿರ್ದೇಶನಾಲಯವು 2015 ರಿಂದ 2021 ವರಗೆ ಅಗತ್ಯ ಅನುಗುಣವಾಗಿ ಐ.ಇ.ಸಿ ಕೆಳಕಂಡ ಕಾರ್ಯಕ್ರಮಗಳ ಕೈಗೂಳ್ಳಲಾಗಿದೆ.<br><br>- ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಡಿಜಿಟಲ್ ಗೋಡೆ ಬರಹಗಳು, ಬಟ್ಟೆ ಹೋರ್ಡಿಂಗ್ಸ್‌ಗಳನ್ನು ಅಳವಡಿಸುವ ಮತ್ತು "ಪ್ರಗತಿ ದರ್ಶನ" ಕಾರ್ಯಕ್ರಮದಡಿಯಲ್ಲಿ ಸಂಚಾರಿ ವಾಹನಕ್ಕೆ ಎಲ್.ಇ.ಡಿ ಟಿವಿಯನ್ನು ಅಳವಡಿಸಿ ಪ್ರಚಾರ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>- ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ Tri vision board, Tin plate board ಅಳವಡಿಸಲಾಗಿರುತ್ತದೆ. ಜಿಲ್ಲಾ ನಗರಾಭಿವೃದ್ಧಿ ಕೋಶ ಹಾಗೂ ಮಹಾನಗರಪಾಲಿಕೆಗಳಲ್ಲಿ Kiosk ಗಳನ್ನು ಅಳವಡಿಸಲಾಗಿರುತ್ತದೆ.<br>- ರಾಜ್ಯದ ಎಲ್ಲಾ ಚಲನಚಿತ್ರ ಮಂದಿರಗಳಲ್ಲಿ ಸ್ವಚ್ಛ ಭಾರತ ಮಿಷನ್ ಯೋಜನೆಯ ಪ್ರಮುಖ ಅಂಶಗಳಾದ Source segregation, home/community composting techniques, prohibition of manual scavenging, alternatives to single use plastic, ODF etc ಕುರಿತು ಕಿರು ಜಾಹೀರಾತು ಚಿತ್ರಗಳನ್ನು ಪ್ರಚಾರ ಪಡಿಸಲಾಗಿರುತ್ತದೆ.<br>- ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ಕಛೇರಿಗಳಿಗೆ ಮತ್ತು ಸಿಬಂಧ್ಧಿಗಳಿಗೆ ಸ್ವಚ್ಛ ಭಾರತ ಮಿಷನ್ ಯೋಜನೆಯ ಸಂದೇಶ ಸಾರುವ 2022ನೇ ಸಾಲಿನ ನೂತನ ಕ್ಯಾಲೆಂಡರ್ ಹಾಗೂ ದಿನಚರಿ ಡೈರಿಗಳನ್ನು ವಿತರಿಸಲಾಗಿರುತ್ತದೆ.<br>- ರಾಜ್ಯದ 31 ಜಿಲ್ಲಾ ಕೇಂದ್ರಗಳಲ್ಲಿ ಸ್ವಚ್ಛಾಗ್ರಹ ಕಲಿಕಾ ಕೇಂದ್ರಗಳ |

| | | |
|---|---|---|
| | | ಮೂಲಕ ಆಸಕ್ತಿಯುಳ್ಳ ಸಾರ್ವಜನಿಕರು ಹಾಗೂ ಸಮುದಾಯ ಸಂಘಗಳು, ಶಾಲಾ ಮಕ್ಕಳಿಗೆ ಮನೆಯಲ್ಲಿ ಹಾಗೂ ಸಮುದಾಯದ ಹಂತದಲ್ಲಿ ಗೊಬ್ಬರ ತಯಾರಿಕೆ, ಬಯೋಮೀಥೇನ್ ತಯಾರಿಕೆ ಮತ್ತು ಮುಂತಾದ ತಯಾರಿಕ ಘಟಕಗಳ ಬಗ್ಗೆ ಪ್ರತ್ಯಕ್ಷಿಕವಾಗಿ ಪ್ರದರ್ಶಿಸಲು ಕ್ರಮಕೈಗೊಳ್ಳಲಾಗಿದೆ.<br>– ಅಮೃತ ನಿರ್ಮಲ ನಗರ ಯೋಜನೆ, waste water management & reuse of treated waste water, source segregation, sustaining ODF status, documentation of best practices ಮುಂತಾದವುಗಳ ಬಗ್ಗೆ ಕಿರು ಚಿತ್ರಗಳನ್ನು ಸಿದ್ಧಪಡಿಸಿ ನಗರ ಸ್ಥಳೀಯ ಸಂಸ್ಥೆಗಳಿಗೆ ಒದಗಿಸಲಾಗಿರುತ್ತದೆ. |
| ಈ) | 2015 ರಿಂದ 2021ರವರೆಗೆ ಐ.ಇ.ಸಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಯಾವ ಯಾವ ಏಜೆನ್ಸಿಗಳನ್ನು ಆಯ್ಕೆ ಮಾಡಲಾಗಿದೆ? | ➢ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಸರ್ಕಾರೇತರ ಸ್ವ-ಸಹಾಯ ಗುಂಪುಗಳ ಮೂಲಕ ಹಾಗೂ ಅರ್ಹ ಏಜೆನ್ಸಿಗಳ ಮೂಲಕ ಐ.ಇ.ಸಿ ಕಾರ್ಯಕ್ರಮಗಳನ್ನು ನಿಯಮಾನುಸಾರ ಜಾರಿಗೊಳಿಸಲಾಗುತ್ತಿದೆ.<br>➢ ಪೌರಾಡಳಿತ ನಿರ್ದೇಶನಾಲಯವು ಅಗತ್ಯತೆಗನುಗುಣವಾಗಿ ಮೇಲೆ ತಿಳಿಸಲಾದ ಐ.ಇ.ಸಿ ಚಟುವಟಿಕೆಗಳಿಗೆ ಸರ್ಕಾರದ ಅಧಿಸೂಚನೆ ಹಾಗೂ ಕೆ.ಟಿ.ಪಿ.ಪಿ ಅಧಿನಿಯಮ-1999ರಲ್ಲಿ ವಿನಾಯಿತಿ ಹೊಂದಿರುವ ಮೆ: ಮಾರ್ಕೆಟಿಂಗ್ ಕಮ್ಯುನಿಕೇಷನ್ ಅಂಡ್ ಅಡ್ವರ್ಟೈಸಿಂಗ್ ಲಿಮಿಟೆಡ್ ಅನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಮೂಲಕ ಸಹ ಐ.ಇ.ಸಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ. |

ಸಂಖ್ಯೆ: ನಅಇ 73 ಸಿಎಸ್ಎಸ್ 2022

[ಎನ್. ನಾಗರಾಜ್ (ಎಂ.ಟಿ.ಬಿ.)]
ಪೌರಾಡಳಿತ, ಸಣ್ಣ ಕೈಗಾರಿಕೆ, ಸಾರ್ವಜನಿಕ ವಲಯ
ಉದ್ಯಮಗಳ ಸಚಿವರು.